# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : **1526**
**ಸದಸ್ಯರ ಹೆಸರು** : ಶ್ರೀ ಕೆ.ಗೋವಿಂದರಾಜ್ (ವಿಧಾನ ಸಭೆಯಿಂದ ಚುನಾಯಿತರಾದವರು)
**ಉತ್ತರಿಸಬೇಕಾದ ದಿನಾಂಕ** : 18.03.2021
**ಉತ್ತರಿಸುವ ಸಚಿವರು** : ಮುಖ್ಯಮಂತ್ರಿಗಳು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರದ ರಸ್ತೆಗಳ ಪಾದಚಾರಿ ಮಾರ್ಗಗಳಲ್ಲಿ, ರಸ್ತೆಗಳ ಮಧ್ಯೆ ಹಾಗೂ ರಸ್ತೆಗಳ ಇಕ್ಕೆಲಗಳಲ್ಲಿ ಸ್ಥಾಪಿಸಲಾಗಿರುವ ವಿದ್ಯುತ್ ಟ್ರಾನ್ಸ್ ಫಾರ್ಮರ್‌ಗಳ ಅಂದಾಜು ಸರ್ಕಾರಕ್ಕೆ ಇದೆಯೇ: ಹಾಗಿದ್ದಲ್ಲಿ, ವಲಯವಾರು ಪ್ರತ್ಯೇಕ ಮಾಹಿತಿ ಒದಗಿಸುವುದು: | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಬೆಂಗಳೂರು ನಗರ ಕ್ಷೇತ್ರ ವಲಯ ವ್ಯಾಪ್ತಿಯಲ್ಲಿ ಸುಮಾರು 8,811 ಸಂಖ್ಯೆಯ ರಸ್ತೆ ಬದಿಯಲ್ಲಿನ ಟ್ರಾನ್ಸ್‌ಫಾರ್ಮರ್‌ಗಳನ್ನು ಗುರುತಿಸಲಾಗಿದ್ದು, ಅವುಗಳ ಪೈಕಿ 4,358 ಸಂಖ್ಯೆಯ ಟ್ರಾನ್ಸ್‌ಫಾರ್ಮರ್‌ಗಳಿಂದ ಪಾದಚಾರಿಗಳಿಗೆ ಅಡಚಣೆಯಾಗುತ್ತಿರುವುದು ಕಂಡು ಬಂದಿದ್ದು, ವಿವರಗಳು ಕೆಳಕಂಡಂತಿವೆ. |
| ಆ) | ಬೆಂಗಳೂರು ನಗರದ ಜನನಿಬೀಡ ರಸ್ತೆಗಳು ಮತ್ತು ಈ ರಸ್ತೆಗಳ ಪಾದಚಾರಿ ಮಾರ್ಗಗಳಲ್ಲಿ ಹಾಗೂ ರಸ್ತೆಗಳ ಮಧ್ಯೆ ಹಾಗೂ ರಸ್ತೆಗಳ ಇಕ್ಕೆಲಗಳಲ್ಲಿ ಅಪಾಯವಾಗಿರುವ ಟ್ರಾನ್ಸ್‌ಫಾರ್ಮರ್ ಗಳಿಂದಾಗಿ ಪಾದಚಾರಿಗಳಿಗೆ / ವಾಹನ ಸವಾರರುಗಳಿಗೆ ಆಗುತ್ತಿರುವ ಅನಾನುಕೂಲದ ಬಗ್ಗೆ ಸರ್ಕಾರವು ಗಂಭೀರವಾಗಿ ಆಲೋಚಿಸಿದೆಯೇ: ಹಾಗಿದ್ದಲ್ಲಿ, ಈ ಕುರಿತಾದ ಮಾಹಿತಿ ಒದಗಿಸುವುದು. | |
| ಇ) | ಸಾರ್ವಜನಿಕರ ಹಿತದೃಷ್ಟಿಯಿಂದ ಪಾದಚಾರಿ ಮಾರ್ಗಗಳಲ್ಲಿನ ರಸ್ತೆಗಳ ಮಧ್ಯೆ ಹಾಗೂ ರಸ್ತೆಗಳ ಇಕ್ಕೆಲಗಳಲ್ಲಿರುವ ವಿದ್ಯುತ್ ಟ್ರಾನ್ಸ್ ಫಾರ್ಮರ್‌ಗಳನ್ನು ಸ್ಥಳಾಂತರಗೊಳಿಸುವ ಪ್ರತ್ಯೇಕ ವ್ಯವಸ್ಥೆ ಬಗ್ಗೆ ಸರ್ಕಾರವು ಗಂಭೀರವಾದ ಕ್ರಮದ ಬಗ್ಗೆ ಯೋಜನೆ ರೂಪಿಸಿದೆಯೇ: ಹಾಗಿದ್ದಲ್ಲಿ ಈ ಕುರಿತು ಸರ್ಕಾರ ಕೈಗೊಂಡ ಕ್ರಮವೇನು? (ಮಾಹಿತಿ ಒದಗಿಸುವುದು) | |

| ವಲಯ | ಪಾದಚಾರಿ ಮಾರ್ಗದಲ್ಲಿರುವ ಟ್ರಾನ್ಸ್ ಫಾರ್ಮರ್‌ಗಳ ಸಂಖ್ಯೆ |
|---|---|
| ಬೆಂಗಳೂರು ಮಹಾನಗರ ಕ್ಷೇತ್ರ ಉತ್ತರ ವಲಯ | 2,638 |
| ಬೆಂಗಳೂರು ಮಹಾನಗರ ಕ್ಷೇತ್ರ ದಕ್ಷಿಣ ವಲಯ | 1,720 |
| ಒಟ್ಟು | **4,358** |

ಇವುಗಳ ಪೈಕಿ 3196 ಸಂಖ್ಯೆಯ ಟ್ರಾನ್ಸ್‌ಫಾರ್ಮರ್‌ಗಳನ್ನು ಈಗಾಗಲೇ ಹೊಸ ವಿನ್ಯಾಸಕ್ಕೆ ಪರಿವರ್ತಿಸಿದ ಹಾಗೂ ಸಿ.ಎ ಸೈಟ್ ಗೆ ಸ್ಥಳಾಂತರಿಸಲಾದ ಟ್ರಾನ್ಸ್‌ಫಾರ್ಮರ್‌ಗಳ ವಿವರಗಳು ಕೆಳಕಂಡಂತಿವೆ

| ವೃತ್ತ | ಹೊಸ ವಿನ್ಯಾಸಕ್ಕೆ ಬದಲಾಯಿಸಿದ ಪರಿವರ್ತಕಗಳ ಸಂಖ್ಯೆ | ಸಿ.ಎ.ಸೈಟ್‌ಗೆ ಸ್ಥಳಾಂತರಿಸಿದ ಪರಿವರ್ತಕಗಳ ಸಂಖ್ಯೆ |
|---|---|---|
| ದಕ್ಷಿಣ | 716 | 02 |
| ಉತ್ತರ | 380 | 0 |
| ಪೂರ್ವ | 1058 | 0 |
| ಪಶ್ಚಿಮ | 540 | 0 |
| ಒಟ್ಟು | **3194** | **02** |

ಹಾಲಿ ಡಬಲ್ ಪೋಲ್ / ಟ್ರಿಪಲ್ ಪೋಲ್ ರಚನೆಯುಳ್ಳ ಪರಿವರ್ತಕ ಕೇಂದ್ರಗಳನ್ನು ಬದಲಾಯಿಸಿ ಸ್ಪನ್ ಪೋಲ್‌ಗಳ ಮೇಲೆ ಪರಿವರ್ತಕಗಳನ್ನು ಅಳವಡಿಸುವ ಕಾಮಗಾರಿಯನ್ನು 'ಹೆಚ್.ಟಿ/ ಎಲ್.ಟಿ ಮೇಲ್ಮಾರ್ಗಗಳನ್ನು ಭೂಗತ ಕೇಬಲ್/ ಏರಿಯಲ್ ಬಂಚ್ ಕೇಬಲ್ ಮಾರ್ಗಗಳನ್ನಾಗಿ ಪರಿವರ್ತಿಸುವ ಯೋಜನೆ' (Over Head to UG) ಯಡಿಯಲ್ಲಿ ಕೈಗೊಂಡಿದ್ದು, ಫೆಬ್ರವರಿ-2021ರ ಅಂತ್ಯಕ್ಕೆ ಒಟ್ಟು 622 ಪರಿವರ್ತಕಗಳನ್ನು ಸ್ಪನ್ ಪೋಲ್‌ಗಳ ಮೇಲೆ ಅಳವಡಿಸಲಾಗಿದ್ದು,



ವಿವರಗಳು ಕೆಳಕಂಡಂತಿವೆ.

| ಕ್ರ. ಸಂ | ವೃತ್ತ | ಡಬಲ್ ಪೋಲ್ / ಟ್ರಿಪಲ್ ಪೋಲ್ ಪರಿವರ್ತಕ ಕೇಂದ್ರಗಳನ್ನು ಸ್ಪನ್ ಪೋಲ್ ಪರಿವರ್ತಕ ಕೇಂದ್ರಗಳಾಗಿ ಪರಿವರ್ತನೆ ಮಾಡಿರುವ ಸಂಖ್ಯೆ |
|---|---|---|
| 1 | ದಕ್ಷಿಣ | 196. |
| 2 | ಉತ್ತರ | 163 |
| 3 | ಪೂರ್ವ | 81 |
| 4 | ಪಶ್ಚಿಮ | 182 |
| | **ಒಟ್ಟು** | **622** |

ಮುಂದುವರೆದು, ಬಾಕಿ ಇರುವ 540 ಸಂಖ್ಯೆಯ ಟ್ರಾನ್ಸ್‌ಫಾರ್ಮರ್‌ಗಳನ್ನು ಬೆ.ವಿ.ಕಂಪನಿಯಲ್ಲಿ ಹಾಲಿ ಚಾಲ್ತಿಯಲ್ಲಿರುವ ಸದರಿ ಯೋಜನೆ ಅಡಿಯಲ್ಲಿ ಹಾಗೂ ಇತರೆ ಕಾಮಗಾರಿಯಡಿಯಲ್ಲಿ ಕೈಗೆತ್ತಿಕೊಂಡು ಹಂತ ಹಂತವಾಗಿ ಬದಲಾಯಿಸಿ ಪಾದಚಾರಿಗಳಿಗೆ ಅಡಚಣೆಯಾಗದಂತೆ ಕ್ರಮ ಕೈಗೊಳ್ಳಲಾಗುತ್ತಿದೆ.

ಸಂಖ್ಯೆ: ಎನರ್ಜಿ 64 ಇಬಿಎಸ್ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ